# ಕರ್ನಾಟಕ ವಿಧಾನ ಪರಿಷತ್

| | | |
|---|---|---|
| 1 | ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ | 575 |
| 2 | ಪ್ರಶ್ನೆ ಕೇಳಿರುವವರು | ಶ್ರೀ. ಕೆ. ಎ. ತಿಪ್ಪೇಸ್ವಾಮಿ<br>(ನಾಮ ನಿರ್ದೇಶನ ಹೊಂದಿದವರು) |
| 3 | ಉತ್ತರಿಸಬೇಕಾದ ದಿನಾಂಕ | 17. 12. 2021 |
| 4 | ಉತ್ತರಿಸಬೇಕಾದವರು | ಮಾನ್ಯ ಕೃಷಿ ಸಚಿವರು |
| 5 | ವಿಷಯ | ಹೆಲ್ತ್ ಮಿಷನ್ ಕಾರ್ಡ್ ಯೋಜನೆಯ ಅನುಷ್ಠಾನ ಕುರಿತು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಉತ್ತಮ ಫಸಲಿಗೆ ಮಣ್ಣಿನ ಆರೋಗ್ಯ ಅತ್ಯಗತ್ಯವಾಗಿದ್ದು, ಇದಕ್ಕೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ನಿರೀಕ್ಷಿತ ಒತ್ತು ನೀಡುತ್ತಿಲ್ಲವೆನ್ನುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಉತ್ತಮ ಫಸಲಿಗೆ ಮಣ್ಣಿನ ಆರೋಗ್ಯ ಅತ್ಯಗತ್ಯವಾಗಿದ್ದು, ಈ ನಿಟ್ಟಿನಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಮಣ್ಣು ಪರೀಕ್ಷೆಯ ಮಹತ್ವ ಮತ್ತು ಮಣ್ಣು ಆರೋಗ್ಯ ಚೇಟಿಯ ಶಿಫಾರಸ್ಸಿನ್ವಯ ಪೋಷಕಾಂಶಗಳನ್ನು ಬಳಸಲು ರೈತರಲ್ಲಿ ಅರಿವು ಮೂಡಿಸಲು ಹೆಚ್ಚು ಒತ್ತನ್ನು ನೀಡುತ್ತಿವೆ. |
| ಆ | ಕೇಂದ್ರ ಸರ್ಕಾರ 2014-15ರಲ್ಲಿ ರೂಪಿಸಿದ ಮಣ್ಣು ಆರೋಗ್ಯ ಅಥವಾ ಫಲವತ್ತತೆ ಕಾರ್ಡ್ ವಿತರಣೆ ಅಭಿಯಾನವಾದ ಹೆಲ್ತ್ ಮಿಷನ್ ಕಾರ್ಡ ಯೋಜನೆ ಮುಗಿದ ನಂತರ ಹೊಸ ಮಣ್ಣಿನ ಪರೀಕ್ಷೆಗೆ ಹೊಸ ಯೋಜನೆ ರೂಪಿಸದಿರುವುದರಿಂದ 2018-19ರಿಂದ ಮಣ್ಣಿನ ಸತ್ವ ಪರೀಕ್ಷೆ ಕಾರ್ಯಕ್ರಮ | ಕೇಂದ್ರ ಸರ್ಕಾರ 2014-15ರಲ್ಲಿ ರೂಪಿಸಿದ ಮಣ್ಣು ಆರೋಗ್ಯ ಕಾರ್ಡ್ ವಿತರಣೆ ಅಭಿಯಾನವಾದ ಮಣ್ಣು ಆರೋಗ್ಯ ಕಾರ್ಡ್ ಕಾರ್ಯಕ್ರಮವನ್ನು ರಾಜ್ಯ ಸರ್ಕಾರವು 2015-16ನೇ ಸಾಲಿನಿಂದ 2018-19ನೇ ಸಾಲಿನವರೆಗೆ 2 ಆವೃತಿಗಳಲ್ಲಿ ಅನುಷ್ಠಾನ ಮಾಡಿದ್ದು, 2019-20ನೇ ಸಾಲಿನಲ್ಲಿ ರೈತ ಹಿಡುವಳಿವಾರು ಮಣ್ಣು ಮಾದರಿ ಸಂಗ್ರಹಿಸಿ ವಿಶ್ಲೇಷಿಸಿ ಮಣ್ಣು ಆರೋಗ್ಯ ಚೇಟಿಗಳನ್ನು ವಿತರಿಸಲು ಪೈಲೆಟ್ ಕಾರ್ಯಕ್ರಮವನ್ನು ಪ್ರತಿ ತಾಲ್ಲೂಕಿಗೆ ಒಂದು ಗ್ರಾಮವನ್ನು ಆಯ್ಕೆ ಮಾಡಿ ಒಟ್ಟು 177 ಗ್ರಾಮಗಳಲ್ಲಿ ಅನುಷ್ಠಾನಗೊಳಿಸಿದ್ದು ರೈತ ಹಿಡುವಳಿವಾರು 65, 363 ಮಣ್ಣು ಆರೋಗ್ಯ ಚೇಟಿಗಳನ್ನು ವಿತರಿಸಲಾಗಿದೆ. ಇದಲ್ಲದೇ 2019-20 |

| | | |
|---|---|---|
| | ಕುಂಠಿತವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ, ಹಾಗಿದ್ದಲ್ಲಿ ಸಂಪೂರ್ಣ ಮಾಹಿತಿ ನೀಡುವುದು: | ಮತ್ತು 2020-21ನೇ ಸಾಲಿನಲ್ಲಿ 3.58ಲಕ್ಷ ಮಣ್ಣು ಮಾದರಿಗಳನ್ನು ಸಂಗ್ರಹಿಸಿ ವಿಶ್ಲೇಷಿಸಲಾಗಿರುತ್ತದೆ. 2020-21ನೇ ಸಾಲಿನಲ್ಲಿ ಮಣ್ಣು ಪರೀಕ್ಷೆಯ ಮಹತ್ವ ಮತ್ತು ಮಣ್ಣು ಆರೋಗ್ಯ ಚೀಟಿಯ ಶಿಫಾರಸ್ಸಿನ್ವಯ ಪೋಷಕಾಂಶಗಳನ್ನು ಬಳಸಲು ರೈತರಲ್ಲಿ ಅರಿವು ಮೂಡಿಸಲು 4573 ಗ್ರಾಮಗಳನ್ನು ಆಯ್ಕೆ ಮಾಡಿ ಪ್ರತಿ ಗ್ರಾಮದಲ್ಲಿಯೂ ಪ್ರಾತ್ಯಕ್ಷಿಕೆಗಳನ್ನು ಏರ್ಪಡಿಸಲಾಗಿರುತ್ತದೆ. 4381 ರೈತರ ತರಬೇತಿಗಳನ್ನು ಆಯೋಜಿಸಲಾಗಿರುತ್ತದೆ. ಕೇಂದ್ರ ಸರ್ಕಾರವು ಈ ನಿಟ್ಟಿನಲ್ಲಿ ಭೂಮಿ ಪೋಷಣ ಅಭಿಯಾನ ಎಂಬ ಯೋಜನೆಯನ್ನು ರೂಪಿಸುತ್ತಿದ್ದು, ಹೊಸ ಯೋಜನೆಗೆ ಅನುಮೋದನೆ ನಿರೀಕ್ಷೆಯಲ್ಲಿರುತ್ತದೆ. |
| ಇ | ತಜ್ಞರ ಪ್ರಕಾರ ಪ್ರತಿ 3 ವರ್ಷಗಳಿಗೊಮ್ಮೆ ಮಣ್ಣಿನ ಫಲವತ್ತತೆ ಪರೀಕ್ಷಿಸಬೇಕಾಗಿದ್ದು, ಬದಲಾದ ಹವಾಮಾನ ಹಾಗೂ ರೈತರ ಬೆಳೆಗಾಗಿ ಬಳಸುವ ರಾಸಾಯನಿಕ ಗೊಬ್ಬರ ಮತ್ತು ಔಷಧಿ ಮೇಲೆ 2 ವರ್ಷಕ್ಕೊಮ್ಮೆ ಮಣ್ಣಿನ ಫಲವತ್ತತೆಯನ್ನು ಪರೀಕ್ಷಿಸಬೇಕೆಂಬ ಅಭಿಪ್ರಾಯ ಸರ್ಕಾರದ ಗಮನಕ್ಕೆ ಬಂದಿದೆಯೇ: ಹಾಗಿದ್ದಲ್ಲಿ ರಾಜ್ಯ ಸರ್ಕಾರ ಈ ಬಗ್ಗೆ ಕೈಗೊಂಡಿರುವ ಕ್ರಮವೇನು? (ಸಂಪೂರ್ಣ ಮಾಹಿತಿ ನೀಡುವುದು) | ತಜ್ಞರ ಪ್ರಕಾರ ಪ್ರತಿ 3 ವರ್ಷಗಳಿಗೊಮ್ಮೆ ಮಣ್ಣಿನ ಫಲವತ್ತತೆ ಪರೀಕ್ಷಿಸಬೇಕಾಗಿದ್ದು, ಬದಲಾದ ಹವಾಮಾನ ಹಾಗೂ ರೈತರ ಬೆಳೆಗಾಗಿ ಬಳಸುವ ರಾಸಾಯನಿಕ ಗೊಬ್ಬರ ಮತ್ತು ಔಷಧಿ ಮೇಲೆ 2 ವರ್ಷಕ್ಕೊಮ್ಮೆ ಮಣ್ಣಿನ ಫಲವತ್ತತೆಯನ್ನು ಪರೀಕ್ಷಿಸುವ ಉದ್ದೇಶದಿಂದ 2015-16ನೇ ಸಾಲಿನಿಂದ 2018-19ನೆ ಸಾಲಿನವರೆಗೆ 2 ಆವೃಗಳಲ್ಲಿ ಕಾರ್ಯಕ್ರಮವನ್ನು ಅನುಷ್ಠಾನ ಮಾಡಲಾಗಿದೆ.<br>ಕೃಷಿ /ತೋಟಗಾರಿಕೆ/ ರೇಷ್ಮೆ ಇಲಾಖೆಯ/ ಕೃಷಿ ವಿಜ್ಞಾನ ಕೇಂದ್ರ /ಸಕ್ಕರೆ ಸಂಸ್ಥೆ/ ಕೃಷಿ ವಿಶ್ವವಿದ್ಯಾಲಯಗಳಲ್ಲಿ ಸ್ಥಾನಿಕ, ಸಂಚಾರಿ ಮಣ್ಣು ಪರೀಕ್ಷಾ ಪ್ರಯೋಗಾಲಯ ಮತ್ತು ಮಿನಿ ಮಣ್ಣು ಪರೀಕ್ಷಾ ಘಟಕಗಳನ್ನು ಒಳಗೊಂಡಂತೆ 103 ಮಣ್ಣು ಪರೀಕ್ಷಾ ಪ್ರಯೋಗಾಲಯಗಳಲ್ಲಿ ಹಾಗೂ ಮಣ್ಣು ಆರೋಗ್ಯ ನಿರ್ವಹಣೆ ಕಾರ್ಯಕ್ರಮದಡಿ ಸ್ಥಾಪಿತವಾಗಿರುವ 281 ಗ್ರಾಮಮಟ್ಟದ ಮಣ್ಣು ಪರೀಕ್ಷಾ ಪ್ರಯೋಗಾಲಯಗಳಲ್ಲಿ ರೈತರು ತಮ್ಮ ಜಮೀನಿನ ಮಣ್ಣು ಪರೀಕ್ಷೆಯನ್ನು ನಿಗದಿತ ಶುಲ್ಕ ಪಾವತಿಸಿ ಮಾಡಿಸಿಕೊಳ್ಳಬಹುದಾಗಿದೆ. |

ಸಂ: AGRI-AAE/150/2021

(ಬಿ.ಸಿ.ಪಾಟೀಲ್)

ಕೃಷಿ ಸಚಿವರು